


# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ರಹಿತ ಪ್ರಶ್ನೆ

ದಿನಾಂಕ : 25-03-2021 ಪ್ರಶ್ನೆ ಸಂಖ್ಯೆ : 1800 (2172)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಎನ್.ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 25-03-2021

ಉತ್ತರಿಸುವ ಸಚಿವರು: ಮಾನ್ಯ ಮುಖ್ಯಮಂತ್ರಿಗಳು

ವಿಷಯ : ನಿರುದ್ಯೋಗಿ ಪದವೀಧರರಿಗೆ ಸ್ಟೈಫೆಂಡ್ ನೀಡುವ ಬಗ್ಗೆ

(ಅ) ನಿರುದ್ಯೋಗಿ ಪದವೀಧರರನ್ನು ಸ್ಟೈಫೆಂಡರಿ ಮೂಲಕ ವಿವಿಧ ಇಲಾಖೆಗಳಲ್ಲಿ 1978ರಲ್ಲಿ ನೇಮಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಆ) 1988ರ ಸ್ಟೈಫೆಂಡರಿ ಪದವೀಧರರಿಗೆ 50% ಮೀಸಲಾತಿ ನೀಡಲು ತೀರ್ಮಾನಿಸಿ ನೇಮಿಸಿಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಇ) ಸ್ಟೈಫೆಂಡರಿ ಪದವೀಧರರು ಸುಮಾರು 12, 13 ವರ್ಷಗಳ ಕಾಲಮಿತಿ ವೇತನ ಪದವೀಧರರಾಗಿ ಸೇವೆ ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; (ವಿವರ ನೀಡುವುದು)

(ಈ) ಸ್ಟೈಫೆಂಡರಿ ಪದವೀಧರರ ಹಾಗೂ ದಿನಗೂಲಿ ನೌಕರರ ಅರ್ಹ ಸೇವೆಯನ್ನು ನಿವೃತ್ತಿ ಪಿಂಚಣಿಗೆ ಪರಿಗಣಿಸುವ ಸಂಬಂಧ ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ದಿನಾಂಕ:02.09.2019ರಲ್ಲಿ ತೀರ್ಪು ಬಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಉ) ಹಾಗಿದ್ದಲ್ಲಿ, ತೀರ್ಪಿನಲ್ಲಿ ಯಾವ ರೀತಿಯಲ್ಲಿ ನಿವೃತ್ತಿ ನೌಕರರ ಅರ್ಹ ಸೇವೆಯನ್ನು ಪರಿಗಣಿಸಿ ಪಿಂಚಣಿ ನೀಡಬೇಕೆಂದು ತಿಳಿಸಲಾಗಿರುತ್ತದೆ ; (ವಿವರ ನೀಡುವುದು)

(ಊ) ಮಿತಿ ವೇತನದಲ್ಲಿ ನಿರ್ವಹಿಸಿರುವ ಸೇವೆಯನ್ನು ಪರಿಗಣಿಸಿ ಪಿಂಚಣಿ ಸೌಲಭ್ಯ ನೀಡುವಂತೆ ಆದೇಶದಲ್ಲಿ ತಿಳಿಸಿದ್ದರೂ ಸಹ ಸರ್ಕಾರದಿಂದ ಯಾವುದೇ ಕ್ರಮ ಆಗದಿರುವುದಕ್ಕೆ ಕಾರಣವೇನು;

(ಋ) ಪ್ರಸ್ತುತ ಯಾವ ರೀತಿ ಅರ್ಹ ಸೇವೆಯನ್ನು ಪರಿಗಣಿಸಲಾಗಿದೆ; (ವಿವರ ನೀಡುವುದು)

(ಎ) ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪಿನಂತೆ ಯಾವ ಕಾಲಮಿತಿಯೊಳಗೆ ಈ ನಿವೃತ್ತಿ ನೌಕರರಿಗೆ ನ್ಯಾಯ ದೊರಕಿಸಲಾಗುವುದು ?